# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಎಸ್. ರವಿ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 781

ಉತ್ತರಿಸಬೇಕಾದ ದಿನಾಂಕ : 10.03.2020

<table>
<tr><th>ಕ್ರಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಸಾಲ ಮನ್ನಾ ಯೋಜನೆ-2018 ರಂತೆ ರೂ.1,00,000/- (ಒಂದು ಲಕ್ಷ) ವರೆಗೆ ಸಹಕಾರಿ ಮತ್ತು ವಾಣಿಜ್ಯ ಬ್ಯಾಂಕುಗಳಿಂದ ಸಾಲ ಸೌಲಭ್ಯ ಪಡೆದಿರುವ ರೈತರ ಸಂಖ್ಯೆ ಮತ್ತು ಮೊತ್ತವೆಷ್ಟು; (ಜಿಲ್ಲಾವಾರು ಮಾಹಿತಿ ನೀಡುವುದು)</td><td><u>ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ</u><br>2018-19 ನೇ ಸಾಲಿನ ರೂ.1.00 ಲಕ್ಷಗಳ ಸಾಲ ಮನ್ನಾ ಯೋಜನೆಯಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ಮತ್ತು ಪಿಕಾರ್ಡ್ ಬ್ಯಾಂಕುಗಳಿಂದ ದಿ:10-7-2018 ಕ್ಕೆ ಹೊರಬಾಕಿ ಹೊಂದಿದ್ದು, ಸಾಲ ಮನ್ನಾ ತಂತ್ರಾಂಶದಲ್ಲಿ ಸಂಬಂಧಿಸಿದ ಸಂಸ್ಥೆಗಳು ಅಳವಡಿಸಿದ ಮಾಹಿತಿ ಪ್ರಕಾರ 18.32 ಲಕ್ಷ ರೈತರ ರೂ.1.00 ಲಕ್ಷವರೆಗಿನ ಸಾಲ ರೂ.8708.19 ಕೋಟಿಗಳಿರುತ್ತವೆ. ಜಿಲ್ಲಾವಾರು ವಿವರವನ್ನು ಅನುಬಂಧ-01ರಲ್ಲಿ ನೀಡಲಾಗಿದೆ. ಈಗಾಗಲೇ 16.01 ಲಕ್ಷ ರೈತರಿಗೆ ರೂ.7434.21 ಕೋಟಿ ಸಾಲ ಮನ್ನಾ ಮಾಡಲಾಗಿದೆ.<br><u>ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ</u><br>ರಾಜ್ಯದಲ್ಲಿ ವಾಣಿಜ್ಯ ಮತ್ತು ಗ್ರಾಮೀಣ ಬ್ಯಾಂಕುಗಳಿಗೆ ಸಂಬಂಧಿಸಿದಂತೆ 9,16,592 ರೈತರಿಗೆ ಕುಟುಂಬವೊಂದಕ್ಕೆ ಗರಿಷ್ಠ ರೂ.2.00 ಲಕ್ಷದವರೆಗೆ ರೂ.6859.70 ಕೋಟಿ ಸಾಲ ಮನ್ನಾ ಮಾಡಲಾಗಿದೆ. ಜಿಲ್ಲಾವಾರು ವಿವರವನ್ನು ಅನುಬಂಧ -2 ರಲ್ಲಿ ಲಗತ್ತಿಸಿದೆ.</td></tr>
<tr><td>ಆ)</td><td>ಸಾಲ ಮನ್ನಾ ಯೋಜನೆಗೆ ಸರ್ಕಾರದಿಂದ ಬಿಡುಗಡೆಯಾದ ಮೊತ್ತವೆಷ್ಟು; ಇನ್ನೂ ಬಿಡುಗಡೆಯಾಗದೆ ಬಾಕಿ ಉಳಿದಿರುವ ಮೊತ್ತವೆಷ್ಟು; ಬಿಡುಗಡೆ ಮಾಡಲು ವಿಳಂಬ ಆಗಿರುವುದಕ್ಕೆ ಕಾರಣಗಳೇನು;</td><td><u>ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ</u><br>ಸಾಲ ಮನ್ನಾ ಯೋಜನೆಯಲ್ಲಿ ಇದುವರೆಗೆ 16.01 ಲಕ್ಷ ರೈತರಿಗೆ ರೂ.7434.21 ಕೋಟಿ ಸಾಲ ಮನ್ನಾ ನೀಡಲು ಅರ್ಹತೆಯನ್ನು ಗುರುತಿಸಿ ಸಾಲ ಮನ್ನಾ ಮೊತ್ತವನ್ನು ಬಿಡುಗಡೆ ಮಾಡಲಾಗಿದೆ. ಈ ಪೈಕಿ ಇದುವರೆಗೆ 15.70 ಲಕ್ಷ ರೈತರಿಗೆ ರೂ.7257.40 ಕೋಟಿಗಳನ್ನು NEFT ಮೂಲಕ ರೈತರ ಉಳಿತಾಯ ಖಾತೆಗೆ ಬಿಡುಗಡೆ ಮಾಡಲಾಗಿದೆ. ಡಿಸಿಸಿ ಬ್ಯಾಂಕುಗಳು ರೈತರ ಉಳಿತಾಯ ಖಾತೆಗಳ ಸಂಖ್ಯೆಯನ್ನು ತಪ್ಪಾಗಿ ನಮೂದಿಸಿದ್ದರಿಂದ ರೂ.176.82 ಕೋಟಿಗಳು ಅಪೆಕ್ಸ್ ಬ್ಯಾಂಕಿಗೆ NEFT ಮೂಲಕ ವಾಪಸ್ ಆಗಿದ್ದು, ಸರಿ ಪಡಿಸುವ ಕಾರ್ಯ ಪ್ರಗತಿಯಲ್ಲಿರುತ್ತದೆ.<br><br>ಉಳಿದ 2,30,990 ರೈತರ ಪೈಕಿ 70,497 ರೈತರು ಅರ್ಹತೆ ಹೊಂದುವ ದಾಖಲಾತಿಗಳನ್ನು ಸಲ್ಲಿಸಿದ್ದು, ಸಾಲ ಮನ್ನಾ ನಿಗದಿಪಡಿಸಿ ಅನುದಾನ ಬಿಡುಗಡೆ ಮಾಡಲು ಕ್ರಮ ಜರುಗಿಸಲಾಗುತ್ತಿದೆ. ಉಳಿದ 1,60,493 ರೈತರ ಅರ್ಹತೆಯನ್ನು ಗುರುತಿಸಲು ಬಾಕಿ ಇದ್ದು, ವಿಳಂಬಕ್ಕೆ ಕಾರಣಗಳನ್ನು ಈ ಕೆಳಗೆ ನೀಡಲಾಗಿದೆ.<br><br><table><tr><th>ಕ್ರಸಂ</th><th>ಅನುದಾನ ಬಿಡುಗಡೆ ಮಾಡಲು ವಿಳಂಬಕ್ಕೆ ಕಾರಣಗಳು</th><th>ರೈತರ ಸಂಖ್ಯೆ</th></tr><tr><td>1</td><td>ರೇಷನ್ ಕಾರ್ಡ್ ಒದಗಿಸದಿರುವ ರೈತರ ಸಂಖ್ಯೆ</td><td>69,749</td></tr><tr><td>2</td><td>ಆಧಾರ್ ಕಾರ್ಡ್, ಆರ್‌ಟಿಸಿ ಮತ್ತು ರೇಷನ್ ಕಾರ್ಡ್ ತಪ್ಪಾಗಿ ನೀಡಿರುವುದರಿಂದ ಅರ್ಹತೆ ಗುರುತಿಸಲು ಬಾಕಿ ಇರುವ ರೈತರ ಸಂಖ್ಯೆ</td><td>36,438</td></tr><tr><td>3</td><td>ತಾಲ್ಲೂಕು ಮಟ್ಟದ ಸಮಿತಿಯಲ್ಲಿ ತಿರಸ್ಕರಿಸಿದ ರೈತರ ಸಂಖ್ಯೆ</td><td>10,188</td></tr><tr><td>4</td><td>ರೂ.1.00 ಲಕ್ಷಕ್ಕಿಂತ ಹೆಚ್ಚಿನ ಅಸಲು ಮತ್ತು ಸುಸ್ತಿ ಬಡ್ಡಿ ಪಾವತಿಸಲು ವಿಫಲವಾಗಿರುವುದರಿಂದ ಅರ್ಹತೆ ಹೊಂದದೆ ಇರುವ ರೈತರ ಸಂಖ್ಯೆ</td><td>12,205</td></tr><tr><td>5</td><td>ಬ್ಯಾಂಕಿನ ಮತ್ತು ಇಲಾಖಾ ಅಧಿಕಾರಿಗಳು ಪರಿಶೀಲಿಸಲು ಬಾಕಿ ಇರುವ ಮತ್ತು ರೈತರು ನೀಡಿರುವ ದಾಖಲೆಗಳನ್ನು</td><td>12,439</td></tr></table></td></tr>
</table>

| | | |
|---|---|---|
| | ತಂತ್ರಾಂಶದಲ್ಲಿ ಅಳವಡಿಸದೇ ಇರುವ ರೈತರ ಸಂಖ್ಯೆ | |
| 6 | ಆದಾಯ ತೆರಿಗೆ ಪಾವತಿದಾರರು, ವೇತನದಾರರು ಮತ್ತು ಪಿಂಚಣಿದಾರರಾಗಿರುವುದರಿಂದ ಮತ್ತು ಇತರೆ ಕಾರಣಗಳಿಗೆ ಅರ್ಹತೆ ಹೊಂದದೆ ಇರುವ ರೈತರ ಸಂಖ್ಯೆ | 19,474 |
| | **ಬಾಕಿ ಉಳಿದ ಒಟ್ಟು ಅರ್ಜಿಗಳು** | **1,60,493** |

ಯೋಜನೆಯಡಿ ಒಟ್ಟು 41,867 ರೈತರುಗಳು ಸಾಲಮನ್ನಾ ಯೋಜನೆಯಡಿ ನಿಗಧಿಪಡಿಸಿದ ಮಾನದಂಡಗಳನ್ವಯ ಅನರ್ಹಗೊಂಡಿರುತ್ತಾರೆ. ಉಳಿದ 1,18,626 ರೈತರುಗಳ ಸಂಬಂಧಿಸಿದ ದಾಖಲೆಗಳನ್ನು ಸಲ್ಲಿಸಿದ ನಂತರ ಪರಿಶೀಲಿಸಿ ಸಾಲ ಮನ್ನಾ ಬಿಡುಗಡೆ ಮಾಡಲು ಕ್ರಮಕೈಗೊಳ್ಳಲಾಗುತ್ತಿದೆ.

**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**

ವಾಣಿಜ್ಯ ಬ್ಯಾಂಕುಗಳಿಗೆ ರೂ.7300/-ಕೋಟಿಗಳನ್ನು ಸರ್ಕಾರದಿಂದ ಬಿಡುಗಡೆ ಮಾಡಲಾಗಿದ್ದು, ಈ ಪೈಕಿ ಬ್ಯಾಂಕುಗಳು / ರೈತರು ಸಲ್ಲಿಸಿರುವ ಮಾಹಿತಿ ಪರಿಶೀಲಿಸಿ, 9,16,592 ರೈತರ ಖಾತೆಗಳಿಗೆ ರೂ.6859.70 ಕೋಟಿಗಳನ್ನು ಬಿಡುಗಡೆಗೊಳಿಸಿದೆ.

ಉಳಿದ ಮೊತ್ತಕ್ಕೆ ಉಳಿದ ರೈತರು ತಮ್ಮ ಆಧಾರ್ ಕಾರ್ಡ್, ರೇಷನ್ ಕಾರ್ಡ್ ಹಾಗೂ ಸರ್ವೆ ಸಂಖ್ಯೆ ಸಲ್ಲಿಸಿದ ನಂತರ ಸರ್ಕಾರದ ಆದೇಶದ ಪ್ರಕಾರ ಪರಿಶೀಲಿಸಿ, ಸಾಲ ಮನ್ನಾ ಪಾವತಿಸಲಾಗುವುದು. ಯೋಜನೆಯ ಅನುಷ್ಠಾನಕ್ಕೆ ಬೇಕಾದ ಮೊತ್ತದ ಬಿಡುಗಡೆಯಲ್ಲಿ ಯಾವುದೇ ವಿಳಂಬವಾಗಿರುವುದಿಲ್ಲ.

| | | |
|---|---|---|
| ಇ) | ಬಾಕಿ ಇರುವ ಮೊತ್ತವನ್ನು ಬಿಡುಗಡೆ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | **ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಸಾಲ ಮನ್ನಾ ಯೋಜನೆಯಲ್ಲಿ ಸಹಕಾರ ಸಂಘಗಳು ತಪ್ಪಾಗಿ ನೀಡಿರುವ ಮಾಹಿತಿಯನ್ನು ಸರಿಪಡಿಸಲು ತಂತ್ರಾಂಶದಲ್ಲಿ ಅವಕಾಶ ಕಲ್ಪಿಸಲಾಗುತ್ತಿದ್ದು, ಮಾಹಿತಿ ಸರಿಪಡಿಸುವ ಬಗ್ಗೆ ಸಂಬಂಧಿಸಿದ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ಮತ್ತು ಇಲಾಖಾಧಿಕಾರಿಗಳೊಂದಿಗೆ ವಿಡಿಯೋ ಸಂವಾದ ನಡೆಸಲಾಗುತ್ತಿದೆ. ರೇಷನ್ ಕಾರ್ಡ್ ನಲ್ಲಿ ಒಂದೇ ಸದಸ್ಯರಿರುವ ರೈತರ ಅರ್ಹತೆಯನ್ನು ತಾಲ್ಲೂಕು ಮಟ್ಟದ ಸಮಿತಿಯಲ್ಲಿ ನಿರ್ಣಯಿಸಲು ಕ್ರಮವಹಿಸಲಾಗಿದೆ.<br>**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಯೋಜನೆಯ ಅನುಷ್ಠಾನದ ಇಲಾಖೆಯ ಬೇಡಿಕೆಯ ಆಧಾರದ ಮೇಲೆ ಕ್ರಮ ಕೈಕೊಳ್ಳಲಾಗುವುದು. |
| ಈ) | ಸ್ವಸಹಾಯ ಗುಂಪುಗಳಿಗೆ ಸಹಕಾರಿ ಸಂಸ್ಥೆಗಳಿಂದ ನೀಡುವ ಸಾಲದ ಮೇಲಿನ ಬಡ್ಡಿ ಸಹಾಯಧನ ಬಿಡುಗಡೆ ಮಾಡಲು ಬಾಕಿ ಇರುವ ಮೊತ್ತ ಎಷ್ಟು; ಈ ಪೈಕಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್‌ಗಳಿಗೆ 2017-18 ನೇ ಸಾಲಿನಲ್ಲಿ ಬಡ್ಡಿ ಸಹಾಯಧನ ಬಿಡುಗಡೆ ಮಾಡದೇ ಬಾಕಿ ಇರುವ ಮೊತ್ತ ಎಷ್ಟು; ಇದುವರೆಗೂ ಬಿಡುಗಡೆ ಮಾಡದೇ ಇರುವ ಕಾರಣಗಳೇನು; | ಸ್ವಸಹಾಯ ಗುಂಪುಗಳ ಸಾಲಗಳ ಮೇಲಿನ ಬಡ್ಡಿ ಸಹಾಯಧನ ಯೋಜನೆಯಲ್ಲಿ ಇದುವರೆಗೆ ರೂ.39.28 ಕೋಟಿಗಳನ್ನು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಿಗೆ ಬಿಡುಗಡೆ ಮಾಡಿದ್ದು, ರೂ.3.28 ಕೋಟಿ ಮಾತ್ರ ಬಿಡುಗಡೆಗೆ ಬಾಕಿ ಇರುತ್ತದೆ.<br>2016-17 ರಲ್ಲಿ ಡಿಸಿಸಿ ಬ್ಯಾಂಕುಗಳು ಕೇಂದ್ರ ಸರ್ಕಾರದ ರಾಷ್ಟ್ರೀಯ ರೂರಲ್ ಲೈವಲಿಹುಡ್ ಮತ್ತು ರಾಷ್ಟ್ರೀಯ ಅರ್ಬನ್ ಲೈವಲಿಹುಡ್ ಮಿಷನ್ ಯೋಜನೆಯನ್ನು ಅಳವಡಿಸಿಕೊಂಡು ಶೇ.4 ರ ಬಡ್ಡಿ ದರದಲ್ಲಿ ಸಾಲ ವಿತರಿಸಿ 2017-18 ರಲ್ಲಿ ಸಲ್ಲಿಸಿದ ಬಿಲ್ಲುಗಳಿಗೆ ಸಂಬಂಧಿಸಿದಂತೆ ರೂ.12.86 ಕೋಟಿ ಮೊತ್ತ ಡಿಸಿಸಿ ಬ್ಯಾಂಕುಗಳಿಗೆ ಬರಲು ಬಾಕಿ ಇರುತ್ತದೆ.<br>ಸದರಿ ಯೋಜನೆಯಲ್ಲಿ ರಾಜ್ಯ ಸರ್ಕಾರದ ಪಾಲನ್ನು ಈಗಾಗಲೇ ಬಿಡುಗಡೆ ಮಾಡಲಾಗಿದೆ. ಡಿಸಿಸಿ ಬ್ಯಾಂಕುಗಳು ಕೇಂದ್ರ ಸರ್ಕಾರಕ್ಕೆ ಆನ್‌ಲೈನ್ ಬಿಲ್ಲು ಸಲ್ಲಿಸಲು ತೊಂದರೆಯಾಗಿ ಕೇಂದ್ರ ಸರ್ಕಾರದ ಸ್ಟೇಟ್ ರೂರಲ್ ಲೈವಲಿಹುಡ್ ಸಂಸ್ಥೆ ಅನುದಾನ ಬಿಡುಗಡೆ ಮಾಡಲು ಸಾಧ್ಯವಿಲ್ಲ ಎಂದು ತಿಳಿಸಿದ ಕಾರಣ ಮೊದಲು ಬಿಲ್ಲು ಸಲ್ಲಿಸಿದ ಡಿಸಿಸಿ ಬ್ಯಾಂಕುಗಳಿಗೆ ಆಯವ್ಯಯದ ಅನುದಾನವನ್ನು ಆಧರಿಸಿ ರಾಜ್ಯ ಸರ್ಕಾರದ ವತಿಯಿಂದಲೇ ಭಾಗಶಃ ಅನುದಾನವನ್ನು ಈಗಾಗಲೇ ಬಿಡುಗಡೆ ಮಾಡಲಾಗಿದೆ. |



| | | |
|---|---|---|
| ಉ) | ಮೇಲ್ಕಂಡಂತೆ 2017–18ನೇ ಸಾಲಿನಿಂದ ಬಾಕಿ ಇರುವ ಸಹಾಯಧನ ಬಿಡುಗಡೆ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | 2019–20ನೇ ಸಾಲಿನಲ್ಲಿ ಒದಗಿಸಿರುವ ಅನುದಾನವನ್ನು ಸದರಿ ಯೋಜನೆಯಡಿಯಲ್ಲಿಯ ಬಿಲ್ಲುಗಳಿಗೆ ಪಾವತಿಸಿದ ನಂತರ ಉಳಿತಾಯವಾದಲ್ಲಿ ಹಿಂದಿನ ಸಾಲಿನಲ್ಲಿ ಸಾಲ ವಿತರಿಸಿದ ಬಿಲ್ಲುಗಳಿಗೆ ಬಡ್ಡಿ ಸಹಾಯಧನ ಬಳಕೆ ಮಾಡಿಕೊಳ್ಳಲಾಗುವುದು. |

**ಸಂಖ್ಯೆ: ಸಿಒ 104 ಸಿಎಲ್ಎಸ್ 2020**

(ಎಸ್.ಟಿ ಸೋಮಶೇಖರ್)

ಸಹಕಾರ ಸಚಿವರು

ಅನುಬಂಧ-1

ಸಹಕಾರ ಸಂಘಗಳ ರೂ.1 ಲಕ್ಷಗಳ ವರೆಗಿನ ಬೆಳೆ ಸಾಲ ಮನ್ನಾ ಯೋಜನೆಯಲ್ಲಿ ರೈತರು ಪಡೆದ ಸಾಲದಲ್ಲಿ ರೂ.1 ಲಕ್ಷಗಳ ವರೆಗೆ ಪಡೆದ ಸಾಲದ ಮೊತ್ತ (ರೂ.ಲಕ್ಷಗಳಲ್ಲಿ)

| ಕ್ರ ಸಂ | ಜಿಲ್ಲೆಯ ಹೆಸರು | ರೈತರ ಸಂಖ್ಯೆ | ರೂ.1 ಲಕ್ಷಗಳ ವರೆಗಿನ ಸಾಲ |
|---|---|---|---|
| 1 | Bagalkot | 140694 | 75549.72 |
| 2 | Bangalore Rural | 17283 | 8138.86 |
| 3 | Bangalore Urban | 8149 | 4205.092 |
| 4 | Belgaum | 278772 | 111777.5 |
| 5 | Bellary | 67729 | 40187.62 |
| 6 | Bidar | 108920 | 46046.45 |
| 7 | Bijapur | 160594 | 66508.88 |
| 8 | Chamarajanagar | 18438 | 11474.9 |
| 9 | Chikkaballapur | 11280 | 8816.035 |
| 10 | Chikkamagalur | 28412 | 18826.9 |
| 11 | Chitradurga | 36443 | 16871.28 |
| 12 | Dakshina Kannada | 67713 | 51211.5 |
| 13 | Davanagere | 63875 | 22045.54 |
| 14 | Dharwad | 14179 | 5931.678 |
| 15 | Gadag | 17354 | 6762.901 |
| 16 | Gulbarga | 49775 | 13841.74 |
| 17 | Hassan | 118367 | 48953.09 |
| 18 | Haveri | 21454 | 6968.911 |
| 19 | Kodagu | 33008 | 26160.3 |
| 20 | kolar | 10133 | 9068.634 |
| 21 | Koppal | 23407 | 9999.23 |
| 22 | Mandya | 111812 | 52542.23 |
| 23 | Mysore | 54897 | 36711.09 |
| 24 | Raichur | 50639 | 24273.05 |
| 25 | Ramanagara | 37509 | 17263.12 |
| 26 | Shimoga | 33352 | 13778.15 |
| 27 | Tumkur | 123917 | 44326.02 |
| 28 | Udupi | 24113 | 16959.9 |
| 29 | Uttara Kannada | 86612 | 52593.86 |
| 30 | YADGIR | 13222 | 3024.478 |
| | Total | 1832052 | 870818.7 |

(781)

ಅನುಬಂಧ 2

Annexure-1 CLWS Bank pay as on 27022020

| SLNO | District | NoOfLoanee | Amount |
|---|---|---|---|
| 1 | BAGALKOTE | 6962 | 500378940.92 |
| 2 | BALLARY | 46226 | 3633286397.21 |
| 3 | BANGALORE RURAL | 5382 | 488420338.49 |
| 4 | BANGALORE URBAN | 885 | 67631130.62 |
| 5 | BELAGAVI | 45024 | 3293346370.89 |
| 6 | BIDAR | 15460 | 1236429919.01 |
| 7 | BIJAPUR | 22315 | 1839867367.53 |
| 8 | CHAMARAJANAGAR | 16802 | 1632436527.92 |
| 9 | CHIKKABALLAPURA | 18244 | 1789766009.29 |
| 10 | CHIKMAGALUR | 25834 | 1996155002.19 |
| 11 | CHITRADURGA | 46176 | 3454477507.19 |
| 12 | DAKSHINA KANNADA | 2836 | 150919735.34 |
| 13 | DAVANAGERE | 37949 | 2777763817.53 |
| 14 | DHARWAD | 46720 | 3617292732.83 |
| 15 | GADAG | 47541 | 3686841756.15 |
| 16 | GULBARGA | 97638 | 6150057009.73 |
| 17 | HASSAN | 42113 | 3396308571.96 |
| 18 | HAVERI | 72960 | 5260367600.67 |
| 19 | KODAGU | 4242 | 293725122.10 |
| 20 | KOLAR | 18736 | 1894354125.68 |
| 21 | KOPPAL | 40692 | 2825154970.22 |
| 22 | MANDYA | 18349 | 1431052825.82 |
| 23 | MYSORE | 39906 | 3128362193.04 |
| 24 | RAICHUR | 63015 | 4525105947.99 |
| 25 | RAMANAGARA | 3998 | 380917291.97 |
| 26 | SHIMOGA | 32660 | 2004335425.28 |
| 27 | TUMKUR | 43529 | 3894244035.46 |
| 28 | UDUPI | 2386 | 110012442.39 |
| 29 | UTTARA KANNADA | 1406 | 56800973.28 |
| 30 | YADGIR | 50606 | 3081204917.67 |
| TOTAL | | 916592 | 68597017006.37 |